# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 533
ಸದಸ್ಯರ ಹೆಸರು : ಶ್ರೀ ಪಿ ಆರ್ ರಮೇಶ್
ಉತ್ತರಿಸಬೇಕಾದ ಸಚಿವರು : ಸಾರಿಗೆ ಸಚಿವರು
ಉತ್ತರಿಸಬೇಕಾದ ದಿನಾಂಕ : 18-07-2019

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಖಾಸಗಿ ಬಸ್ಸುಗಳಲ್ಲಿ ಪ್ರಯಾಣಿಕರಿಗಿಂತ ಹೆಚ್ಚಾಗಿ ಲಗೇಜುಗಳನ್ನು ಸಾಗಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಬಂದಿದ್ದಲ್ಲಿ, ಈ ಬಗ್ಗೆ ಯಾವ ರೀತಿ ಕ್ರಮಗಳನ್ನು ಕೈಗೊಳ್ಳಲಾಗಿದೆ? | ಹೌದು, ಖಾಸಗಿ ಬಸ್ಸುಗಳಲ್ಲಿ ನಿಯಮ ಬಾಹಿರವಾಗಿ ಹೆಚ್ಚಿನ ಪ್ರಮಾಣದ ಲಗೇಜುಗಳನ್ನು ವಾಣಿಜ್ಯ ಉದ್ದೇಶಕ್ಕಾಗಿ ಸಾಗಾಣಿಕೆ ಮಾಡಿ ಸಂಚರಿಸುವ ವಾಹನಗಳನ್ನು ತಪಾಸಣೆ ಮಾಡಿ ತಪ್ಪಿತಸ್ಥ ಪ್ರಕರಣಗಳಲ್ಲಿ ಮೋಟಾರು ವಾಹನ ಕಾಯ್ದೆ ಮತ್ತು ನಿಯಮಗಳಡಿ ಪ್ರಕರಣಗಳನ್ನು ದಾಖಲಿಸಿ ಕ್ರಮಕೈಗೊಳ್ಳಲಾಗುತ್ತಿದೆ.<br><br>ಖಾಸಗಿ ಪ್ರವಾಸಿ ಹಾಗೂ ಒಪ್ಪಂದ ವಾಹನಗಳು ಅನಧಿಕೃತ ಕಾರ್ಯಚರಣೆ ಮಾಡುತ್ತಿರುವುದು ತನಿಖಾ ಸಮಯದಲ್ಲಿ ಕಂಡುಬಂದ ಮೇರೆಗೆ ಸದರಿ ವಾಹನಗಳ ರಹದಾರಿಗಳನ್ನು ಅಮಾನತ್ತು ಪಡಿಸಲು ಮತ್ತು ಮೋಟಾರು ವಾಹನ ನಿಯಮಾವಳಿಗಳನ್ವಯ ದಂಡ ವಿಧಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಆ | ಈ ರೀತಿಯ ಲಗೇಜುಗಳ ಜೊತೆಗೆ ಸ್ಫೋಟಕ/ಮಾದಕ ವಸ್ತುಗಳನ್ನು ಸಾಗಿಸುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಬಂದಿದ್ದಲ್ಲಿ, ಯಾವ ರೀತಿಯ ಕ್ರಮಗಳನ್ನು ಕೈಗೊಳ್ಳಲಾಗಿದೆ? | |
| ಇ | ಸಾರಿಗೆ ಇಲಾಖೆಯ ಕಾಯಿದೆ ಅಡಿಯಲ್ಲಿ ಈ ರೀತಿಯಾಗಿ ಬಸ್‌ಗಳಲ್ಲಿ ಪ್ರಯಾಣಿಕರಿಗಿಂತ ಹೆಚ್ಚು ಲಗೇಜುಗಳನ್ನು ಸಾಗಿಸಲು ಅವಕಾಶವಿದೆಯೇ ಹಾಗೂ ಇದಕ್ಕೆ ಸಂಬಂಧಿಸಿದಂತೆ ನ್ಯಾಯಾಲಯದ ಆದೇಶಗಳು ಇವೆಯೇ? ಇದ್ದಲ್ಲಿ, ಮಾಹಿತಿ ನೀಡುವುದು? | ಮೋಟಾರು ವಾಹನಗಳ ಕಾಯ್ದೆ 1988 ಮತ್ತು ಅದರಡಿ ರಚಿತವಾದ ನಿಯಮಗಳಲ್ಲಿ ಖಾಸಗಿ ಬಸ್ಸುಗಳಲ್ಲಿ ಪ್ರಯಾಣಿಕರಿಗಿಂತ ನಿಯಮ ಬಾಹಿರವಾಗಿ ಹೆಚ್ಚಿನ ಪ್ರಮಾಣದ ಲಗೇಜುಗಳನ್ನು ಸಾಗಿಸಲು ಅವಕಾಶವಿರುವುದಿಲ್ಲ. |
| ಈ | ಈ ಬಗ್ಗೆ ಸಾರಿಗೆ ಇಲಾಖೆಯ ಮೋಟಾರು ವಾಹನ ಕಾಯ್ದೆಯಡಿರುವ ಮಾನದಂಡಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಕೇಂದ್ರ ಮೋಟಾರು ವಾಹನಗಳ ನಿಯಮಗಳು 1989ರ, ನಿಯಮ 128 (9) ಮತ್ತು ಕರ್ನಾಟಕ ಮೋಟಾರು ವಾಹನಗಳ ನಿಯಮಗಳು 1989ರ, ನಿಯಮ 71, 72, 73 & 75ರಲ್ಲಿ ಖಾಸಗಿ ವಾಹನಗಳಲ್ಲಿ ಲಗೇಜುಗಳನ್ನು ಸಾಗಿಸಲು ಅವಕಾಶವಿರುತ್ತದೆ.<br><br>ಸದರಿ ರಹದಾರಿ ನಿಯಮಗಳನ್ನು ಉಲ್ಲಂಘಿಸಿ ಸಂಚರಿಸುವ ವಾಹನಗಳಿಗೆ ಕರ್ನಾಟಕ ಮೋಟಾರು ವಾಹನಗಳ ನಿಯಮಗಳು 1989ರ, ನಿಯಮ 81 (ಎ) ರನ್ವಯ ರೂ.5,000 ರಿಂದ 10,000 ರವೆಗೆ ದಂಡವನ್ನು ವಿಧಿಸಬಹುದಾಗಿರುತ್ತದೆ. |

ಸಂಖ್ಯೆ: ಟಿಡಿ 16 ಟಿಡಿಕ್ಯೂ 2019

(ಡಿ.ಸಿ.ತಮ್ಮಣ್ಣ)
ಸಾರಿಗೆ ಸಚಿವರು